# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಸದಸ್ಯರ ಹೆಸರು | : | ಶ್ರೀ ಸುನೀಲ್ ಸುಬ್ರಮಣಿ ಎಂ.ಪಿ |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 339 |
| ಉತ್ತರಿಸ ಬೇಕಾದ ದಿನಾಂಕ | : | 06.03.2020 |
| ಉತ್ತರಿಸುವ ಸಚಿವರು | : | ವಿ. ಸೋಮಣ್ಣ, ವಸತಿ ಸಚಿವರು |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| (ಅ) | ಗ್ರಾಮ ಪಂಚಾಯಿತಿಗಳಲ್ಲಿ ವಸತಿ ಯೋಜನೆಗಳ ಫಲಾನುಭವಿಗಳ ಆಯ್ಕೆಯಲ್ಲಿನ ನಿಬಂಧನೆ ಹಾಗೂ ನಿಯಮಗಳೇನು; (ವಿವರ ನೀಡುವುದು). | ಸರ್ಕಾರವು ವಿವಿಧ ವಸತಿ ಯೋಜನೆಯಡಿಯಲ್ಲಿ ಫಲಾನುಭವಿಗಳ ಆಯ್ಕೆಗೆ ಅರ್ಹತೆ ಮತ್ತು ಮಾನದಂಡಗಳನ್ನು ನಿಗದಿಪಡಿಸಿದ್ದು, ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಿದೆ<br><br>ವಿವಿಧ ವಸತಿ ಯೋಜನೆಯಗಳಡಿ ಗ್ರಾಮ ಪಂಚಾಯಿತಿಗೆ ನಿಗದಿ ಪಡಿಸಿದ ಗುರಿಗೆ ಎದುರಾಗಿ ಫಲಾನುಭವಿಗಳನ್ನು ಗ್ರಾಮ ಸಭೆಗಳ ಮೂಲಕ ಆಯ್ಕೆಗೊಳಿಸಲಾಗುತ್ತಿದೆ. |
| (ಆ) | ಒಬ್ಬ ಫಲಾನುಭವಿಯ ಎರಡು ಮೂರು ಬಾರಿ ಬೇರೆ ಬೇರೆ ಆಶ್ರಯ ಯೋಜನೆಗಳಲ್ಲಿ ಮನೆಗಳನ್ನು ಪಡೆದಿದ್ದರೆ ಇದಕ್ಕೆ ಹೊಣೆಗಾರರು ಯಾರು; ಅವರಿಂದ ಅನುದಾನವನ್ನು ವಾಪಸ್ ಪಡೆಯಲು ಇರುವ ನಿಯಮಗಳೇನು; | ಎರಡು ಮೂರು ಬಾರಿ ವಸತಿ ಯೋಜನೆಯಲ್ಲಿ ಮನೆ ಪಡೆದಿರುವಂತಹ ಫಲಾನುಭವಿಗಳಿಂದ ಅನುದಾನವನ್ನು ಈ ಕೆಳಕಂಡತೆ ವಾಪಸ್ ಪಡೆಯಲು ಕ್ರಮವಹಿಸಲು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯಿತಿ ಇವರಿಗೆ ತಿಳಿಸಲಾಗಿದೆ.<br><br>1. ಗ್ರಾಮೀಣ ವಸತಿ ಯೋಜನೆಗಳಡಿ ಆಯ್ಕೆಯಾದ ಫಲಾನುಭವಿ ಅನರ್ಹರಿರುವ ಬಗ್ಗೆ ಹಾಗೂ ಅರ್ಹತೆ ಹೊಂದಿಲ್ಲದಿರುವ ಬಗ್ಗೆ ಯಾವುದೇ ಸಾರ್ವಜನಿಕರಿಂದ/ಜನಪ್ರತಿನಿಧಿಗಳಿಂದ/ಗಣ್ಯವ್ಯಕ್ತಿಗಳಿಂದ ದೂರು ಬಂದಲ್ಲಿ, ಸಂಬಂಧಪಟ್ಟ ಜಿಲ್ಲಾ ಪಂಚಾಯಿತಿ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಅಥವಾ ತಾಲ್ಲೂಕು ಪಂಚಾಯಿತಿ ಕಾರ್ಯನಿರ್ವಹಣಾಧಿಕಾರಿಗಳು ಅಧಿಕೃತ ದಾಖಲೆಗಳ ಆಧಾರದ ಮೇಲೆ ಪರಿಶೀಲಿಸಿ (ಅಗತ್ಯವಿದ್ದಲ್ಲಿ ಸ್ಥಳ ತನಿಖೆ ಮಾಡಿ) ಫಲಾನುಭವಿಯು ನಿಗದಿಪಡಿಸಿದ ಅರ್ಹತೆಯನ್ನು ಹೊಂದಿಲ್ಲದಿರುವುದು ಕಂಡುಬಂದಲ್ಲಿ ಅಂತಹ ಫಲಾನುಭವಿಯನ್ನು ರದ್ದುಪಡಿಸಲು ಕ್ರಮವಹಿಸಲಾಗುತ್ತದೆ.<br>2. ಒಂದು ವೇಳೆ ಅಂತಹ ಫಲಾನುಭವಿಗಳಿಗೆ ಅನುದಾನ ಬಿಡುಗಡೆಗೊಂಡಿದ್ದಲ್ಲಿ ಶೇಕಡ 11%ರ ಬಡ್ಡಿ ಸಮೇತ ಒಂದೇ ಕಂತಿನಲ್ಲಿ ವಸೂಲಿ ಮಾಡಿ ಸರ್ಕಾರಕ್ಕೆ ಜಮಾ ಮಾಡುವುದು. ಗ್ರಾಮಪಂಚಾಯಿತಿಯಲ್ಲಿ ಅಂತಹ ಅನರ್ಹರನ್ನು ಆಯ್ಕೆಗೊಳಿಸಿದವರ ಮೇಲೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಕಾಯಿದೆ ಪ್ರಕಾರ ಶಿಸ್ತು ಕ್ರಮ ವಹಿಸಲಾಗುತ್ತದೆ. |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| (ಇ) | ಗ್ರಾಮ ಪಂಚಾಯಿತಿ ಸದಸ್ಯ ಅಥವಾ ಮಾಜಿ ಸದ್ಯಸರೇ ಎರಡೂ ಮೂರು ಬಾರಿ ಬೇರೆ ಬೇರೆ ಆಶ್ರಯ ಯೋಜನೆಗಳಲ್ಲಿ ಮನೆಗಳನ್ನು ಪಡೆದಿದ್ದಲ್ಲಿ ಅವರ ಮೇಲೆ ತೆಗೆದುಕೊಳ್ಳುವ ಕಾನೂನು ಕ್ರಮಗಳೇನು; (ವಿವರ ನೀಡುವುದು) | ಗ್ರಾಮ ಪಂಚಾಯಿತಿ ಸದಸ್ಯ ಅಥವಾ ಮಾಜಿ ಸದ್ಯಸರು ಎರಡೂ ಮೂರು ಬಾರಿ ಬೇರೆ ಬೇರೆ ವಸತಿ ಯೋಜನೆಗಳಲ್ಲಿ ಮನೆಗಳನ್ನು ಪಡೆದಿದ್ದಲ್ಲಿ ಅವರ ಮೇಲೆ ತೆಗೆದುಕೊಳ್ಳುವ ಕಾನೂನು ಕ್ರಮಗಳು ಈ ಕೆಳಕಂಡತಿವೆ.<br><br>1. ಒಂದು ವೇಳೆ ವಸತಿ ಯೋಜನೆಯ ಮಾರ್ಗಸೂಚಿಗಳನ್ನು ಉಲ್ಲಂಘನೆ ಮಾಡಿ, ಅಧಿಕಾರ ದುರ್ಬಳಕೆ ಮಾಡಿಕೊಂಡು ವಸತಿ ಸೌಕರ್ಯ ಪಡೆದುಕೊಂಡಿದ್ದಲ್ಲಿ ಸದರಿಯವರ ಮೇಲೆ ಕ್ರಿಮಿನಲ್ ಮೊಕದ್ದಮೆ ಹೂಡಿ ಕ್ರಮ ಕೈಗೊಳ್ಳಲಾಗುತ್ತದೆ.<br>2. ಒಂದು ವೇಳೆ ಅನುದಾನ ಬಿಡುಗಡೆಯಾಗಿದ್ದಲ್ಲಿ ಶೇಕಡ 11%ರ ಬಡ್ಡಿ ಸಮೇತ ಒಂದೇ ಕಂತಿನಲ್ಲಿ ವಸೂಲಿ ಮಾಡಿ ಸರ್ಕಾರಕ್ಕೆ ಜಮಾ ಮಾಡುವುದು. ಗ್ರಾಮಪಂಚಾಯಿತಿಯಲ್ಲಿ ಅಂತಹ ಅನರ್ಹರನ್ನು ಆಯ್ಕೆಗೊಳಿಸಿದವರ ಮೇಲೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಕಾಯಿದೆ ಪ್ರಕಾರ ಶಿಸ್ತು ಕ್ರಮ ವಹಿಸಲಾಗುತ್ತದೆ. |
| (ಈ) | ಈ ಕುರಿತಾಗಿ ರಾಜ್ಯದಲ್ಲಿ ಸರ್ಕಾರದ ಗಮನಕ್ಕೆ ಬಂದ ಪ್ರಕರಣಗಳು ಎಷ್ಟು; ಅಂತಹ ಪ್ರಕರಣ ಬಗ್ಗೆ ಸರ್ಕಾರ ತೆಗೆದುಕೊಂಡ ಕ್ರಮಗಳೇನ? (ಮಾಹಿತಿ ನೀಡುವುದು) | ಬೆಳಗಾವಿ ಜಿಲ್ಲೆಯ ಹುಕ್ಕೇರಿ ತಾಲ್ಲೂಕಿನ ಕಮತನೂರು ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ಅಧ್ಯಕ್ಷರು ಎರಡು ಬಾರಿ ಮನೆ ಪಡೆದುಕೊಂಡ ಪ್ರಕರಣದಲ್ಲಿ ಇವರ ಸದಸ್ಯತ್ವ ಅನರ್ಹಗೊಳಿಸಲಾಗಿದೆ ಹಾಗೂ ಅವರಿಂದ ಎರಡನೇ ಬಾರಿ ಪಡೆದುಕೊಂಡ ಅನುದಾನ ರೂ.20,000/-ಗಳನ್ನು ಮರಳಿ ಭರಣ ಮಾಡಲಾಗಿದೆ. ಬೆಳಗಾವಿ ಜಿಲ್ಲೆಯನ್ನು ಹೊರತುಪಡಿಸಿ ಇನ್ನುಳಿದ ಜಿಲ್ಲೆಗಳಿಂದ ಇಂತಹ ಪ್ರಕರಣಗಳು ಕಂಡು ಬಂದಿರುವುದಿಲ್ಲ.<br><br>ವಿವಿಧ ವಸತಿ ಯೋಜನೆಗಳಡಿ ಆಯ್ಕೆಯಾಗುತ್ತಿರುವ ಫಲಾನುಭವಿಗಳನ್ನು ರದ್ದುಪಡಿಸಲು ಹೊರಡಿಸಿರುವ ಮಾರ್ಗಸೂಚಿ ಅಥವಾ ಸುತ್ತೋಲೆಯನ್ನು ಒದಗಿಸಲು ಮಾನ್ಯ ಉಚ್ಚನ್ಯಾಯಲಯವು ಸೂಚಿಸಿದ ಹಿನ್ನೆಲೆಯಲ್ಲಿ ದಿನಾಂಕ: 30.01.2019 ರ ಸರ್ಕಾರಿ ಆದೇಶದ ರೀತ್ಯಾ ಅನರ್ಹ ಫಲಾನುಭವಿಗಳನ್ನು ರದ್ದುಪಡಿಸಲು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.<br><br>1. ಗ್ರಾಮೀಣ ವಸತಿ ಯೋಜನೆಗಳಡಿ ಆಯ್ಕೆಯಾದ ಫಲಾನುಭವಿ ಅನರ್ಹರಿರುವ ಬಗ್ಗೆ ಹಾಗೂ ಅರ್ಹತೆ ಹೊಂದಿಲ್ಲದಿರುವ ಬಗ್ಗೆ ಯಾವುದೇ ಸಾರ್ವಜನಿಕರಿಂದ/ಜನಪ್ರತಿನಿಧಿಗಳಿಂದ/ಗಣ್ಯವ್ಯಕ್ತಿಗಳಿಂದ ದೂರು ಬಂದಲ್ಲಿ, ಸಂಬಂಧಪಟ್ಟ ಜಿಲ್ಲಾ ಪಂಚಾಯಿತಿ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಅಥವಾ ತಾಲ್ಲೂಕು ಪಂಚಾಯಿತಿ ಕಾರ್ಯನಿರ್ವಹಣಾಧಿಕಾರಿಗಳು ಅಧಿಕೃತ ದಾಖಲೆಗಳ ಆಧಾರದ ಮೇಲೆ ಪರಿಶೀಲಿಸಿ (ಅಗತ್ಯವಿದ್ದಲ್ಲಿ ಸ್ಥಳ ತನಿಖೆ ಮಾಡಿ) ಫಲಾನುಭವಿಯು ನಿಗದಿಪಡಿಸಿದ ಅರ್ಹತೆಯನ್ನು ಹೊಂದಿಲ್ಲದಿರುವುದು ಕಂಡುಬಂದಲ್ಲಿ ಅಂತಹ ಫಲಾನುಭವಿಯನ್ನು ರದ್ದುಪಡಿಸಲು ಕ್ರಮವಹಿಸಲಾಗುತ್ತದೆ.<br>2. ಒಂದು ವೇಳೆ ಅಂತಹ ಫಲಾನುಭವಿಗಳಿಗೆ ಅನುದಾನ ಬಿಡುಗಡೆಗೊಂಡಿದ್ದಲ್ಲಿ ಶೇಕಡ 11%ರ ಬಡ್ಡಿ ಸಮೇತ ಒಂದೇ ಕಂತಿನಲ್ಲಿ ವಸೂಲಿ ಮಾಡಿ ಸರ್ಕಾರಕ್ಕೆ ಜಮಾ ಮಾಡುವುದು. ಗ್ರಾಮಪಂಚಾಯಿತಿಯಲ್ಲಿ ಅಂತಹ ಅನರ್ಹರನ್ನು ಆಯ್ಕೆಗೊಳಿಸಿದವರ ಮೇಲೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಕಾಯಿದೆ ಪ್ರಕಾರ ಶಿಸ್ತು ಕ್ರಮ ವಹಿಸಲಾಗುತ್ತದೆ. |

ವ ಇ 92 ಹೆಚ್‌ಎಎಂ 2020

(ವಿ.ಸೋಮಣ್ಣ)
ವಸತಿ ಸಚಿವರು

# ಅನುಬಂಧ

## ಗ್ರಾಮ ಪಂಚಾಯಿತಿಗಳಲ್ಲಿ ವಸತಿ ಯೋಜನೆಗಳ ಫಲಾನುಭವಿಗಳ ಆಯ್ಕೆಯ ವಿಧಾನ

- ಅರ್ಜಿದಾರರು ಕಡ್ಡಾಯವಾಗಿ ಮಹಿಳೆಯಾಗಿರಬೇಕು ಮಾಜಿ ಯೋಧರು, ವಿಧುರರು, ಅಂಗವಿಕಲರು ಮತ್ತು ಹಿರಿಯ ನಾಗರೀಕರಾಗಿದ್ದಲ್ಲಿ ಪುರುಷರು ಸಹಾ ಅರ್ಹರಾಗಿರುತ್ತಾರೆ.

- 2018ನೇ ಸಾಲಿನ ಕೇಂದ್ರ ಸರ್ಕಾರದ ಮಾರ್ಗಸೂಚಿಯನ್ವಯ ಗುರುತಿಸಲಾದ ವಸತಿ ರಹಿತರ ಸಮೀಕ್ಷೆಯ ಪಟ್ಟಿಯಲ್ಲಿದ್ದು, ಸ್ವಂತ ನಿವೇಶನ ಹೊಂದಿರಬೇಕು.

- ಅರ್ಜಿದಾರರ ಕುಂಟುಂಬವು ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಹಿಂದುಳಿದಿದ್ದು, ವಾರ್ಷಿಕ ಆದಾಯವು ಗ್ರಾಮೀಣ ಪ್ರದೇಶದವರಾಗಿದಲ್ಲಿ ರೂ. 32000/- ಕ್ಕಿಂತ ಕಡಿಮೆ ಇರಬೇಕು.

- ಅರ್ಜಿದಾರರ ಕುಟುಂಬವು ವಸತಿರಹಿತರಾಗಿದ್ದು, ಅರ್ಜಿದಾರರು ಅಥವಾ ಕುಂಟುಬದ ಯಾವುದೇ ಸದ್ಯಸರು ಹೆಸರಿನಲ್ಲಿ ಕರ್ನಾಟಕದ ಯಾವುದೇ ಭಾಗದಲ್ಲಿ ಸ್ವಂತ ಮನೆಯನ್ನು ಹೊಂದಿರಬಾರದು. ಶಿಥಿಲಗೊಂಡ ಮನೆ ಅಥವಾ ಗುಡಿಸಲಿನಲ್ಲಿ ವಾಸಿಸುತ್ತಿರುವವರು ಅರ್ಹರಾಗಿರುತ್ತಾರೆ.

- ಅರ್ಜಿದಾರರು ಸ್ವಂತ ನಿವೇಶನ ಹೊಂದಿದ್ದು ನಿವೇಶನಕ್ಕೆ ಸಂಬಂಧಿಸಿದಂತೆ ಖಾತೆ ಹೊಂದಿರಬೇಕು (ಪಾರಂಪರಿಕ ಅರಣ್ಯ ಹಕ್ಕುಗಳ ಕಾಯ್ದೆಯನ್ವಯ ಜಿಲ್ಲಾ ಸಮಿತಿಯಿಂದ ನೀಡಲಾದ ಹಕ್ಕುಪತ್ರ ಪಡೆದಿದ್ದಲ್ಲಿ ವಸತಿ ಸೌಕರ್ಯ ಪಡೆಯಲು ಪರಿಗಣಿಸಬಹುದಾಗಿದೆ.)

- ಬೇರೆ ಯಾವುದೇ ಯೋಜನೆ/ ಇಲಾಖೆಯಿಂದ ಈಗಾಗಲೇ ವಸತಿ ಸೌಲಭ್ಯ ಪಡೆದಿರಬಾರದು.

- ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾ)ಯಡಿ ವಸತಿ ಸೌಲಭ್ಯ ಪಡೆಯಲು ಕೇಂದ್ರ ಸರ್ಕಾರದಿಂದ ನೀಡಲಾದ ಸಾಮಾಜಿಕ ಆರ್ಥಿಕ ಮತ್ತು ಜಾತಿ ಜನಗಣತಿ 2011ರ ಪಟ್ಟಿಯಲ್ಲಿ ಹೆಸರು ಸೇರಿರಬೇಕು.

- ಡಾ.ಬಿ.ಆರ್.ಅಂಬೇಡ್ಕರ್ ವಸತಿ ಯೋಜನೆಯಡಿ ವಸತಿ ಸೌಲಭ್ಯ ಪಡೆಯಲು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ವರ್ಗಕ್ಕೆ ಸೇರಿದವರಾಗಿರಬೇಕು. ಈ ವರ್ಗದ ವಸತಿ ರಹಿತರಿಗೆ ಬೇಡಿಕೆ ಆಧಾರಿತವಾಗಿ ವಸತಿ ಕಲ್ಪಿಸಲಾಗುವುದು. (2017-18)